ಡಾ|| ಎಚ್.ಆರ್. ರಘುನಾಥಭಟ್*

# ಚಂದ್ರಗುತ್ತಿಯಲ್ಲಿ ಪರ್ಶಿಯನ್ ಶಾಸನ ಶೋಧನೆ

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಚಂದ್ರಗುತ್ತಿಯ ವಾಸ್ತುಶಿಲ್ಪ ಕೃತಿಗಳು ಪ್ರಾಕ್ತನ ಪಂಡಿತರ ಗಮನ ಸೆಳೆದದ್ದು ಒಂದು ಶತಮಾನದ ಹಿಂದೆ.[1] ಅಲ್ಲಿಯ ರೇಣುಕಾಂಬೆಯ ಮಹಾತ್ಮೆ ಶತಶತಮಾನಗಳಿಂದ ಜನಜನಿತ. ಬರಬರುತ್ತ ಅತಿರೇಕಕ್ಕೆಳೆದು ಅಲ್ಲಿಯ ಹಲವು ಸೇವೆಗಳಲ್ಲಿ 'ಬತ್ತಲೆ ಸೇವೆ' ಇಡೀ ಜಗತ್ತಿನ ಲಕ್ಷ್ಯ ಸೆಳೆಯುವಷ್ಟಾಗಿ, ಚಂದ್ರಗುತ್ತಿಯ ಪರ್ಯಾಯನಾಮ ಈ ಬತ್ತಲೆಸೇವೆ ಆಗಿ ಹೋಗಿದ್ದುದು ದುರ್ದೈವದ ಸಂಗತಿ.[2] ಈ ಗೊಂದಲದ ನಡುವೆ ಅಲ್ಲಿಯ ವಾಸ್ತುಶಿಲ್ಪ ವೈಭವ ಕಣ್ಣಿಗೆ ಕಾಣದಂತಾಯಿತು. ಕಾಡು ಮುಚ್ಚಿದ್ದು ಇನ್ನೊಂದು ಕಾರಣವಿರಬಹುದು. ಅದನ್ನು ಬಗೆದು ಒಳಹೊಕ್ಕರೆ ಗಿರಿದುರ್ಗದೊಳಗಣ ಕೋಟೆ ಕೊತ್ತಳ, ಗುಡಿ, ಮಸೀದಿ, ಮದ್ದಿನ ಪಣತ, ಹನುಮಾನ್ ಚೌಕ, ಮುಸುಕಿನ ಬಾವಿ ತೆರೆದು ನಮ್ಮನ್ನು ಬೆರಗುಗೊಳಿಸುತ್ತದೆ ! ಇವುಗಳನ್ನೆಲ್ಲ ಯಾರು ನಿರ್ಮಿಸಿದರು ಅಥವ ಪುನರ್ ನಿರ್ಮಾಣ ಮಾಡಿದರು-ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಈ ಹಿನ್ನೆಲೆಯಲ್ಲಿ ಈಚೆಗೆ ನನ್ನ ಕ್ಷೇತ್ರಕಾರ್ಯದಲ್ಲಿ ಪತ್ತೆಯಾದ ಪರ್ಶಿಯನ್ ಶಾಸನ ಶೋಧನೆ ಕುರಿತು ಒಂದು ಟಿಪ್ಪಣಿಯನ್ನು ಮೊದಲ ಬಾರಿಗೆ ಇಲ್ಲಿ ಪ್ರಕಟಿಸಲಾಗುತ್ತಿದೆ.[3]

ಪ್ರಸ್ತುತ ಶಿಲಾಶಾಸನ ಚಂದ್ರಗುತ್ತಿದುರ್ಗದ ಗೋಡೆಯ ಬುರುಜಿನ ಮೇಲೆ, ಸು. ೧೪ ಮೀ. ಎತ್ತರದಲ್ಲಿ ದುರ್ಗಮವಾದ ಜಾಗದಲ್ಲಿದೆ ; ಕಡಿದಾದ ಕೋಟೆಯ ಬುರುಜಿನ ಗೋಡೆಯಲ್ಲಿ ಅಡಗಿದ್ದ ಶಾಸನ ಫಲಕದ ಮೇಲೆ ಗಿಡಬಳ್ಳಿ-ಪಾಚಿ ಹಬ್ಬಿದ್ದು ದೂರದಿಂದ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಇದನ್ನು ಕಂಡು ಹಿಡಿದದ್ದು ಕೇವಲ ಆಕಸ್ಮಾತ್ತಾಗಿ. ನನ್ನ ಜೊತೆಗೆ ಕರೆದುಕೊಂಡು ಹೋಗಿದ್ದ ಕಲ್ಲಪ್ಪನ ಸಹಾಯವನ್ನಿಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.[4]

ಇದೊಂದು ಪರ್ಶಿಯನ್ ಶಾಸನ, ಅರೇಬಿಕ್ ಲಿಪಿಯ ನಸ್ಕ್ ಶೈಲಿಯಲ್ಲಿ ಕಂಡರಿಸಲಾಗಿದೆ. ಈ ಶಾಸನ ಪಾಠವನ್ನು ಹೀಗೆ ಓದಲಾಗಿದೆ.

---

* ರೀಡರ್, ಪ್ರಾಚೀನ ಇತಿಹಾಸ ಹಾಗೂ ಶಾಸನಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೫೮೦ ೦೦೩.

1 ನೋಡಿ, ಫ್ರಾನ್ಸಿಸ್ ಬುಕನನ್, ಎಜರ್ನಿ....ಸಂ iii, ಲಂಡನ್, ೧೮೦೭ ; ಬಿ.ಎಲ್. ರೈಸ್, ಮೈಸೂರು....ಸಂ ii, ಲಂಡನ್, ೧೮೯೭ ; ಸಿ. ಹಯವದನರಾವ್, ಮೈಸೂರು ಗೆಝೆಟಿಯರ್, ಸಂ. v, ಬೆಂಗಳೂರು.

2 ಈ ಪ್ರಚಾರ ಎಷ್ಟು ತೀವ್ರಗತಿಗೆ ಹೋಯಿತೆಂದರೆ ಅಲ್ಲಿ ಜರುಗುತ್ತಿದ್ದ ವಾರ್ಷಿಕ ರಥೋತ್ಸವವನ್ನು ಈಗ ಕೆಲವು ವರ್ಷಗಳಿಂದ ನಿಲ್ಲಿಸಲಾಗಿದೆ.

3 ಈ ಶಾಸನ ವ್ಯಾಸಂಗದಲ್ಲಿ ನೆರವಾದ, ಅಲಿಗಡ ಮುಸ್ಲಿಂ ವಿಶ್ವವಿದ್ಯಾಲಯದ ಪ್ರೊ|| ಜಲಾಲಿಯವರಿಗೆ ಹಾಗೂ ಕರ್ನಾಟಕ ಕಾಲೇಜಿನ ಸೂಫಿಯಾ ಶೇಕ್ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

4 ಈಗ ಕೆಲ ತಿಂಗಳುಗಳಿಂದ ಈ ಶಾಸನ ಶೋಧನೆಗಾಗಿ ಹಲವು ಬಾರಿ ಚಂದ್ರಗುತ್ತಿಗೆ ಕ್ಷೇತ್ರಕಾರ್ಯ ಹೋಗಿದ್ದು ಈ ಸಲ ಪತ್ತೆಯಾಯಿತು.

೧. ಬಿನಾ ಶುದ್ ಇನಾಯ-ತಿ-ಇಲಾಹಿ
೨. ಬುರ್ಜ್ ಇಬ್ರಾಹಿಂ ಆದಿಲ್‌ಶಾಹಿ
೩. ಸರಹ್ ಸಲಸ್ ಅರಬೇನ್ ಅಲಫ್

ಇದರ ಅರ್ಥವಿವರಣೆಯನ್ನು ಈ ರೀತಿಯಾಗಿ ನೀಡಬಹುದು. ಬುರುಜುಗಳ ಸಹಿತವಾದ ಈ ಕೋಟೆಯನ್ನು ಇಬ್ರಾಹಿಂ ಆದಿಲ್‌ಶಾಹಿಗಳು ಹಿಜರಿ ೧೦೪೩ರಲ್ಲಿ (೧೬೩೪) ದೇವರದಯದಿಂದ ಕಟ್ಟಿಸಿದರು.

ಇದೊಂದು ಪ್ರತಿಷ್ಠಾನ-ಶಾಸನ (Foundation inscription) ಇದು ಸಂಕ್ಷಿಪ್ತವಾಗಿದ್ದರೂ ತೇದಿಯ ವಿವರ ಮತ್ತು ರಾಜನ ಹೆಸರಿರುವುದರಿಂದ ಐತಿಹಾಸಿಕವಾಗಿ ಮಹತ್ವವುಳ್ಳದ್ದಾಗುತ್ತದೆ.

ಚಂದ್ರಗುತ್ತಿಯಲ್ಲಿ ಆದಿಲ್‌ಶಾಹಿಗಳ ಆಳ್ವಿಕೆಯ ಕಾಲದಲ್ಲಿ, ವಾಸ್ತುಶಿಲ್ಪ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಸಮಕಾಲೀನ ಇತಿಹಾಸಕಾರನಾದ ಫೆರಿಸ್ತಾ ಹೇಳಿದ ಮಾತಿಗೆ[5] ಆ ಕೋಟೆ ಗೋಡೆಗೆ ಅಂಟಿಕೊಂಡಿರುವ, ಇದೀಗ ಪತ್ತೆಯಾಗಿರುವ ಶಿಲಾಶಾಸನದಿಂದ ಹೆಚ್ಚಿನ ಖಚಿತತೆ ಬಂತು. ಅಷ್ಟೇ ಅಲ್ಲ ಆದಿಲ್ ಶಾಹಿಗಳ 'ಶಿಯಾ' ಧರ್ಮದಡಿ ಹಿಂದುತ್ವದ ಕೆಲ ಲಕ್ಷಣಗಳನ್ನು ಸಮನ್ವಯ ಭಾವದಿಂದ ಅಳವಡಿಸಿಕೊಂಡಿರುವುದೂ ಶಾಸನೀಯವಾಗಿ ಸೂಚಿಸಿದಂತಾಯಿತು.

ಶಿವಮೊಗ್ಗ ಜಿಲ್ಲೆಯಲ್ಲಿ ಈವರೆಗೆ ಐದಾರು ಪರ್ಶಿಯನ್ ಶಾಸನಗಳು ಪತ್ತೆಯಾಗಿವೆ.[6] ಈ ಪಟ್ಟಿಗೆ ಚಂದ್ರಗುತ್ತಿಶಾಸವೂ ಸೇರುವಂತಾಗಿದೆ. ಈ ಶಾಸನವನ್ನೊಳಗೊಂಡಂತೆ ಪರ್ಶಿಯನ್ ಶಾಸನಗಳ ಪ್ರತ್ಯೇಕ ಅಧ್ಯಯನ ಮಾಡುವ ಅಗತ್ಯವೂ ಇನ್ನು ಹೆಚ್ಚಾಗಿ ಕಂಡು ಬರುತ್ತಿದೆಯೆಂಬುದನ್ನೂ ಈ ಶಾಸನ ಶೋಧನೆ ಬೆರಳಿಟ್ಟು ತೋರಿಸುತ್ತದೆ. ಆ ದಿಕ್ಕಿನತ್ತ ನಾವು ಸಾಗಬೇಕಾಗಿದೆ.

ಏಳು ಸುತ್ತಿನ ಕೋಟೆಯ ಆರನೆಯ ಗೋಡೆಯ ಮೇಲಿರುವ ಈ ಶಾಸನ ಪಡಿಯಚ್ಚನ್ನು ಅಗಲೇ ಪತ್ತೆಯಾದ (೧೯೯೨ರಲ್ಲಿ) ಮತ್ತೊಂದು ಪರ್ಶಿಯನ್ ಶಾಸನದೊಟ್ಟಿಗೆ ಹೋಲಿಸಿ ನೋಡಿದಾಗ ಲಿಪಿಶೈಲಿ ಹಾಗೂ ಲಿಪಿಸೌಂದರ್ಯ ಬೇರೆ ತೆರನಾದ್ದು ಕಂಡು ಬರುತ್ತದೆ. ಬಿಜಾಪುರದ ಆದಿಲ್‌ಶಾಹಿಗಳ ಕಾಲದ ಸುಂದರ ಲಿಪಿಯನ್ನು 'ನಸ್ತಲಿಕ್' ಎಂದು ಬಣ್ಣಿಸಲಾಗಿದೆ. ಚಂದ್ರಗುತ್ತಿಯಲ್ಲಿ ಈ ಹಿಂದೆ ಶೋಧ ಮಾಡಿದ ಪರ್ಶಿಯನ್ ಶಾಸನ ವೃತ್ತಾಕಾರದ ಫ್ರೇಮಿನೊಳಗಿದ್ದು ನಾಲ್ಕು ಸಾಲುಗಳಲ್ಲಿ ಅಕ್ಷರಗಳನ್ನು ಬಳಪದ ಕಲ್ಲು ಹಲಗೆಯ ಮೇಲೆ ತುಸು ಆಳವಾಗಿ ಆದರೆ ಕಲಾತ್ಮಕವಾಗಿ, ಸೂಕ್ಷ್ಮವಾಗಿ ಕಂಡರಿಸಲಾಗಿದೆ. ಈಗ ಕಂಡು ಹಿಡಿದ ಶಿಲಾ ಶಾಸನ ಆಯತಾಕಾರದ ಫ್ರೇಮಿನೊಳಗೆ ಮೂರು ಸಾಲುಗಳಲ್ಲಿ ಅಕ್ಷರಗಳನ್ನಷ್ಟೆ ಬಿಟ್ಟು ಉಳಿದ ಭಾಗವನ್ನು ಕೊರೆದು ತೆಗೆಯಲಾಗಿದೆ. ಈ ಒಂದು ಲಿಪಿಕಂಡರಣೆಯ ವ್ಯತ್ಯಾಸ ವಿಶೇಷದಿಂದಾಗಿ ಅಕ್ಷರಗಳು ಇಲ್ಲಿ ಉಬ್ಬಿವೆ (embossed), ತಾಂತ್ರಿಕವಾಗಿ ಪರ್ಶಿಯನ್ ಶಾಸನಗಳ ಲೇಖನ ಮಾದರಿಯ ಇನ್ನೊಂದು ಬಗೆಯನ್ನಿಲ್ಲಿ ನೋಡಬಹುದು. ಲಿಪಿ ಸೌಂದರ್ಯ ಅಷ್ಟೊಂದು ನವಿರಾಗಿಲ್ಲ. ಆದಿಲ್ ಶಾಹಿಗಳ ಕ್ಯಾಲಿಗ್ರಫಿಯ ಈ ಎರಡೂ ಮಾದರಿಗಳು (ಒಳಕಂಡರಣೆ ಹಾಗೂ ಹೊರ ಉಬ್ಬು ಲಿಪಿಶೈಲಿ) ಮಲೆನಾಡಿನಲ್ಲಿ ಮೂಡಿ ಬಂದ ಬಗೆಯನ್ನು ಇವು ಸೂಚಿಸುತ್ತವೆ.

ಲಿಪಿಕಂಡರಣೆಯ ಎರಡು ವಿಭಿನ್ನ ತಂತ್ರಗಳಲ್ಲಿ ಸೌಂದರ್ಯ ಪ್ರಜ್ಞೆ ಎದ್ದು ಕಾಣುವುದೊಂದು ವಿಶೇಷವಾದರೆ, ಅದಕ್ಕಿಂತ ವಿಶೇಷ ಹಾಗೂ ಸ್ವಾರಸ್ಯಕರ ಸಂಗತಿಯೆಂದರೆ ಸಮಕಾಲೀನ ಹಿಂದೂ ಶಾಸನ ಪರಂಪರೆಯನ್ನು ಅಥವ ಕೆಲಲಕ್ಷಣಗಳನ್ನು ಮುಸ್ಲಿಂ ಶಾಸನಗಳಲ್ಲಿಅಳವಡಿಸಿರುವುದು. ಆಚಂದ್ರಾರ್ಕತಾರಂಬರ ತತ್ವದ (ಶಾಶ್ವತ ತತ್ವ) ಚಂದ್ರ-ಸೂರ್‍ಯರ ಚಿತ್ರಣ-ಸಾಕ್ಷಿ ಸಂಕೇತವೂ ಹೌದು. ಇದು ನಮ್ಮ ಪರಂಪರೆಯ ಬಹುತೇಕ ಶಾಸನಗಳ ಶಿರೋಭಾಗದಲ್ಲಿ ಕಂಡು ಬರುವವು, ಇದನ್ನು ಆದಿಲ್‌ಶಾಹಿಗಳು ತಮ್ಮ ಅರೆಬಿಕ್-ಪರ್ಶಿಯನ್ ಶಾಸನಗಳಲ್ಲಿ, ಲಿಖಿತ ಭಾಗದ ಆಚೀಚೆ ಸ್ಪಷ್ಟವಾಗಿ ಎದ್ದು ಕಾಣುವಂತೆ ಕೆತ್ತಿದ್ದಾರೆ. ಇಂಥಲ್ಲಿ

5 ನೋಡಿ, ಫೆರಿಸ್ತಾ ಎಂ.ಕೆ., ತಾರಿಖ್-ಇ-ಫೆರಿಸ್ತಾ, ಸಂ. ೪, ಮುಂಬಯಿ, ೧೯೩೧-೨.

6 ನೋಡಿ ಎಕ, vii, ಶಿಕಾರಿಪುರ ೩೨೪ (೧೬೩೨) ; ಚನ್ನಗಿರಿ ೪೩ (೧೬೫೩), ೪೪ (೧೬೫೩.)

ಆದಿಲ್‌ಶಾಹಿಗಳ ಹಿಂದೂಧರ್ಮದ ಸಮನ್ವಯತತ್ವ ಅಡಗಿದೆಯೆಂದು ಹೇಳಬಹುದು.[7] ಇದನ್ನು ಇನ್ನಷ್ಟು ಪುಷ್ಟೀಕರಿಸುವಂತೆ ಚಂದ್ರಗುತ್ತಿ ಕೋಟೆ ಗೋಡೆಯ ಮೇಲೆ ಹನುಮಾನ್ ಶಿಲ್ಪಫಲಕಗಳನ್ನು ಜೋಡಿಸಲಾಗಿದೆ. ಈ ಕೋಟೆ ಭಾಗವನ್ನು "ಹನುಮಾನ್ ಚೌಕ" ಎಂದೇ ಕರೆಯುತ್ತಾರೆ. ಇನ್ನೊಂದೆಡೆ ಗರುಡನ ಶಿಲ್ಪ ಫಲಕವಿದ್ದುದನ್ನು ಗಮನಿಸುವಂತಿದೆ. ಇದನ್ನೆಲ್ಲ ನೋಡಿದಾಗ ಈ ಕೋಟೆಯನ್ನು ಕಟ್ಟಿಸಿದವರು ಸ್ಥಳೀಯ ಹಿಂದೂ ಪಾಳೆಯಗಾರರೋ ಅಥವ ಆದಿಲ್ ಶಾಹಿಗಳೋ ಎಂಬ ಸಂದೇಹ ಬರುವುದು ಸಹಜ. ಈ ಸಂದೇಹ ನಿವಾರಣೆ ಪ್ರಸ್ತುತ ಶಾಸನ ಶೋಧನೆಯಿಂದ ಖಚಿತವಾಗಿ ಆಗುತ್ತದೆ. ಅಂತೆಯೇ ಇದಕ್ಕೆ ಐತಿಹಾಸಿಕ ವಿಶೇಷ ಮಹತ್ವ ಬರುತ್ತದೆ.

---

7 ಕರ್ನಾಟಕದಲ್ಲಿ ಆಳಿದ ಆದಿಲ್‌ಶಾಹಿಗಳ ಕಾಲ ಸಮಾಜೋ-ಧಾರ್ಮಿಕವಾಗಿ ಬಹು ಸ್ವಾರಸ್ಯಕರವಾಗಿದ್ದು ಸಮಕಾಲೀನ ಸಾಹಿತ್ಯ-ಕಲೆ-ಸೂಫಿಗಳ ಅನುಭಾವ ಸಾಹಿತ್ಯಗಳಲ್ಲಿ ಈ ಉದಾರನೀತಿ ಚೆನ್ನಾಗಿ ಪಡಿಮೂಡಿದೆ.